ಸ್ವಸ್ತಿಶ್ರೀ ೧೦೫ ಅತಿಬಲ ಗ್ರಂಥಮಾಲೆ ಪುಷ್ಪ ೩೮

|| ಓಂ ನಮಃ ಸಿದ್ಧೇಭ್ಯಃ ||











# ದ್ವಾದಶಾನುಪ್ರೇಕ್ಷಾ.

ಪ್ರಕಾಶಕರು,
ಸ್ವಸ್ತಿಶ್ರೀ ೧೦೫ ಅತಿಬಲ ಮಹಾರಾಜರು.

ಸಹಾಯಕರು,
ಭುಜ್ಜಪ್ಪಾ ರಾಮಪ್ಪಾ ಕುಮಾರಗೌಡ್ರ ಖವಟಕೊಪ್ಪ.

೧೯೫೫. [ ಕಿ. ೩ ಆಣೆ.

# ಗ್ರಂಥ ಸಹಾಯಕರು.



ಶ್ರೀಮಾನ್ ಬುಜ್ಜಪ್ಪಾ ರಾಮಪ್ಪಾ ಕುಮಾರಗೌಡ್ರ ಮುಕ್ಕಾಮ ಖವಟಕೊಪ್ಪ ತಾಲೂಕ ಅಥಣಿ ಜಿಲ್ಹಾ ಬೆಳಗಾಂವ ಇವರು ಖವಟಕೊಪ್ಪ ದಲ್ಲಿ ಧರ್ಮಾತ್ಮರಿದ್ದು ಇವರು ಎರಡು ವರ್ಷದ ಹಿಂದೆ ವಸ್ತುವಿಜ್ಞಾನಸಾರ ವೆಂಬ ಗ್ರಂಥವನ್ನು ಮಾಡಿಸಿದ್ದಲ್ಲದೆ ಈ ವರ್ಷ ಸ್ವಸ್ತಿಶ್ರೀ ೧೦೫ ಮಹಾಬಲ ಮಹಾರಾಜರು ವಿವಹಾರಕ್ಕೆಂದು ಖವಟಕೊಪ್ಪಕ್ಕೆ ಹೋದ ಕಾಲಕ್ಕೆ ದ್ವಾದಶಾನುಪ್ರೇಕ್ಷಾ ಎಂಬ ಪುಸ್ತಕವನ್ನು ಬಹಳ ಜನರು ಅಪೇಕ್ಷಿಸುತ್ತಾರೆ ಅಂದ ಕೂಡಲೆ ಸದರೀ ಬುಜಪ್ಪನವರು ಅದರ ಖರ್ಚು ಕೊಡುತ್ತೇವೆಂದು ಶೀಘ್ರವಾಗಿ ಶ್ರೀಮಹಾವೀರ ಮುದ್ರಣಾಲಯಕ್ಕೆ ಕಳಿಸಿದರು. ಅದು ಅತಿ ಶೀಘ್ರವಾಗಿ ಪ್ರಿಂಟಾಯಿತು. ಇವರಿಗೆ ದೇವರು ಸನ್ಮಂಗಳವನ್ನುಂಟು ಮಾಡಲಿ. ವೇಳೆಗೆ ಸರಿಯಾಗಿ ತಯಾರು ಮಾಡಿ ಕೊಟ್ಟ ಶ್ರೀಮಹಾವೀರ ಮುದ್ರಣಾಲಯದ ಒಡೆಯರಾದ ಬಿ. ಡಿ. ಚೌಗುಲೆಯವರಿಗೂ ನಮ್ಮ ಶುಭ ಆಶೀರ್ವಾದಗಳು.

ಸ್ವಸ್ತಿ ಶ್ರೀ ೧೦೫ ಅತಿಬಲ ಮಹಾರಾಜರು.

# ದ್ವಾದಶಾನು ಪ್ರೇಕ್ಷಾ ಪದ್ಯಾವಲಿ.



ಧಾಟಿ:—ಕೋಲಿನ ಪದದಂತೆ.

ಕೋಲು ಕೋಲಿನಾ ವಿನಗು ಕೋಲು ಕೋಲಿನಾ। ಕೋಲುನಾಡಿರಿ ಜಿನರ ವಚನ ಪಾಡಿರಿ ॥೧॥ ಅರಿಹಂತ ಸಿದ್ಧರ ಆಚಾರ್ಯುಪಾಧ್ಯಾಯರ। ಸರ್ವ ಸಾಧುಗಳ ಪಾದ ಪದ್ಮಕೆ ವಂದಿಸಿ ॥ ೨ ॥ ಇನ್ನು ಪೇಳುವೆ ದ್ವಾದಶ ಅನುಪ್ರೇಕ್ಷೆಯಾ। ಸಾನುರಾಗದಿಂ ನೀವು ಧ್ಯಾನಿಟ್ಟ ಕೇಳಿರಿ ॥ ೩ ॥ ಅಧ್ರುವ ಅಶರಣಾ, ಸಂಸಾರ, ಏಕತ್ವಾ, ಅನ್ಯತ್ವವೂ, ಅಶುಚಿತ್ವ, ಕೇಳಿರೀ ॥ ೪ ॥ ಆಶ್ರವ, ಸಂವರಾ, ನಿರ್ಜರಾ, ಕೇಳಿರೀ । ಲೋಕ ಸ್ವರೂಪಾ ನಿಮಗೆ ಹಗುರದಿ ಪೇಳುವೆನು ॥ ೫ ॥ ಬೋಧಿ ದುರ್ಲಭಾ ಮತ್ತೆ ಧರ್ಮಾನುಪ್ರೇಕ್ಷಾ । ಮನ ವಚನ ಕಾಯಾ ಶುದ್ಧಿಯಿಂದಲಿ ಕೇಳಿರೀ ॥ ೬ ॥

## ಅಧ್ರುವಾನು ಪ್ರೇಕ್ಷಾ

ಅಧ್ರುವ ಅನುಪ್ರೇಕ್ಷಾ ನಿಮಗೆ ಪೇಳುವೆ ನಾಲಿಸರೀ । ಮೂರು ಲೋಕದೊಳು ದೃಷ್ಟಿಗೋಚರ ವಸ್ತುಗಳು ॥ ೭ ॥ ಶಾಶ್ವತವಲ್ಲವೂ ಇವು ಮಾಯದ ಮಾಟಗಳು । ಪುದ್ಗಲ ಪರ್ಯಾಯಾ ನಾನಾರೂಪ ತೋರುವವು ॥ ೮ ॥ ದ್ರವ್ಯ ಶಾಶ್ವತಾಗುಣಗಳ ಪರ್ಯಾಯ ನಾಶವೂ! ಪುಟ್ಟುತ ಬೆಳೆಯುತ ನಾಶವಾಗಿ ಪೋಗುವವು ॥೯॥ ಇದನ್ನರಿಯದ ಮೂಢಮತಿಗಳೆಲ್ಲರೂ । ಕಂಡದ್ದೆಲ್ಲವೂ ಶಾಶ್ವತವೆಂದು ತಿಳಿಯುವರು ॥ ೧೦ ॥ ಜನ್ಮವೂ ತಾನೆ ಮರಣ ಸಹಿತ ಬಂದಿಹುದೂ । ಯುವ್ವನವು ತಾನೇ ಮುಪ್ಪು ತಂದೇ ತೀರುವದು ॥೧೧॥ ಲಕ್ಷ್ಮೀ ಬಂದವಳೂ ನಾಶವಾಗಿ ಪೋಗುವಳೂ। ಲೋಭಿ ಜೀವಗಳು ಇದನು ನಂಬಿ ಕುಳಿತಿಹರು ॥ ೧೨ ॥ ಆಪ್ತ ಇಷ್ಟರು ಪರಿವಾರ ಜನರೆಲ್ಲಾ । ಪುತ್ರಪುತ್ರಿಯರೂ ಮತ್ತು ಮಿತ್ರರೆಲ್ಲರೂ ॥೧೩॥ ಧನ ಧಾನ್ಯ

ಗಳೂ ಮತ್ತು ಆನೆ ಕುದುರೆಗಳೂ । ಮನೆ ಮಾಟುಗಳೂ ನಾಶವೆಂದು ತಿಳಿಯಿರೀ ॥೧೪॥ ಪಂಚ ಇಂದ್ರಿಯ ಸುಖದ ಸಾಧನೆಗಳೆಲ್ಲ । ಜೀವಕೆ ಆಡಿಸಿ ಕುಣಿಸುತ ಮಾಯವಾಗುವವೂ ॥ ೧೫ ॥ ಆಪ್ತ ಇಷ್ಟರು ಮತ್ತು ಬೀಗರು ಬಿಜ್ಜರು । ಪತ್ನಿ ಪುತ್ರರು ಇವರು ದಾರಿಕಾರರೂ ॥ ೬ ॥ ಆಯು ತೀರಿದ ಕ್ಷಣಕೆ ಇವರು ಎಲ್ಲರೂ। ಹೇಳದೆ ಕೇಳದೆ ತಮ್ಮ ದಾರೀ ಹಿಡಿಯುವರು॥೧೭ ನಿನ್ನ ದೇಹವು ಕೇಳು ಜೀವರಾಜನೇ । ಹುಳಕು ಕೊಳಕವೂ ದುರ್ಗಂಧೆ ಇರುವದೂ ॥ ೧೮ ॥ ಉಡಿಸಿ ತೊಡಿಸಿದರೂ ಎಣ್ಣಿ ಬೆಣ್ಣಿ ಹಚ್ಚಿದರೂ । ನಾನಾ ಪಕ್ವಾನ್ನ ತಿನ್ನಿಸಿದರೂ ನಾಯುವದೂ ॥ ೧೯ ॥ ಹಾಲು ಮೊಸರು ಮತ್ತೆ ತುಪ್ಪ ಸಕ್ಕರೆ । ಹಣ್ಣು ಹಂಪಲ ತಿನ್ನಿಸಿದರೂ ಸಾಯುವದು ॥೨೦॥ ಆಯು ತೀರಿದ ಕ್ಷಣಕೆ ನಿಮ್ಮ ದೇಹವೂ । ಹಸೀ ಮಣ್ಣಿನ ಪಾತ್ರೆಯಂತೆ ಕರಗುವದು ॥೨೧॥ ಲಕ್ಷ್ಮೀಯ ಸ್ಥಿತಿಗತಿಯಾ ಕೇಳು ಆತ್ಮ ರಾಜನೆ। ಇಂದ್ರ ಚಂದ್ರರನೂ ಮತ್ತೆ ಚಕ್ರ ಧರರನ್ನೂ ॥ ೨೨ ॥ ನಾರಾಯಣರನ್ನೂ ಪ್ರತಿ ನಾರಾಯಣರನ್ನೂ । ಹೇಳದೆ ಕೇಳದೆ ತಾನು ಬಿಟ್ಟ ಹೋಗುವಳು ॥೨೩॥ ಮಂತ್ರ ತಂತ್ರಿಕರಾ ಮತ್ತೆ ಶೂರ ವೀರರಾ । ಕುಲೀನ ಧೀರರನೂ ತಾನು ಬಿಟ್ಟು ತೆರಳುವಳೂ ॥ ೨೪ ॥ ಪಾಪ ಪುಣ್ಯಗಳಾ ಉದಯಾಗತದ ಫಲವೆಂದು । ತಿಳಿಯದ ಮೂಢರು ನನ್ನದೆಂದು ಕುಣಿಯುವರು ॥ ೨೫ ॥ ಹಂಡೆ ಭಾಂಡಿಗಳೊಳ್ ಧನವ ತುಂಬಿ ಇಡುವರು । ಭೂಮಿಯೊಳು ಹೂಳಿಟ್ಟು ತಾವು ಕಾಯುತ ಮಲಗುವರು ॥ ೨೬ ॥ ಹಗಲು ರಾತ್ರಿಯಲ್ಲಿ ತಾವು ಕಾಯುತಲಿರುವರು । ಇವರು ಕಾವಲುಗಾರರೂ ಧನದ ಭೋಗಿಗಳಲ್ಲವು ॥ ೨೭ ॥ ಬುದ್ಧಿವಂತರು ತಮಗೆ ಲಕ್ಷ್ಮೀ ಬಂದಾಗ । ದಾನ ಧರ್ಮದೊಳು ವ್ಯಯ ಮಾಡುತಲಿರಬೇಕು ॥೨೮॥ ಹಿಂದೆ ಅನಂತ ಜೀವ ರಾಸಿಗಳೆಲ್ಲವೂ । ಲೋಭಕೆ ಬಲಿ ಬಿದ್ದು ದುರ್ಗತಿಗೆ ಇಳಿದವೂ ॥ ೨೯ ॥ ಧನದ ಲೋಭಿಗೆ ಆಹಾರದ ರುಚಿಯಿಲ್ಲಾ । ರಾತ್ರಿ ಕಾಲಕ್ಕೆ ನಿದ್ರೆ ಇಲ್ಲದೆ ಇರುವನೂ ॥೩೦॥ ಇಂಥ ಲೋಭಿಗಳು ತಾವು ತಿನ್ನಲರಿಯರು । ಅನ್ಯರು ತಿಂದರೇ ತಾವು ಮರ ಮರ ಮರಗುವರು ॥ ೩೧ ॥ ವಸ್ತ್ರಾಭರಣಗಳಾ ತಾವು ಧರಿಸಲಾರರೂ । ಅನ್ಯರು ಧರಿಸಿದರೆ ಸಂತಾಪ ಬಡುವದು ॥ ೩೨ ॥ ಲೋಭದ ಮಹಿಮೆಯೂ ಬಹು ವಿಚಿತ್ರವಿರುವದೂ। ಜೀವರಾಶಿಗಳಾ ದುರ್ಗತಿಗೆ ಕಳಿಸುವದೂ ॥೩೩॥

ಅತಿ ಲೋಭಿಯೂ ಕಾಳಿಂಗ ಹಾವಾಗಿ | ಧನವನು ಕಾಯುತ ಭೂಮಿ ಯೊಳಗೆ ಕೂಡ್ರುವದು || ೩೪ || ಮಧ್ಯಮ ಲೋಭಿಯೂ ಹೆಗ್ಗಣಾಗಿ ಹುಟ್ಟುವದೂ | ಜನರ ಮನೆಗಳ ಗರಗರ ಕೆದರುತ ತಿರುಗುವುದು || ೩೫ || ಕನಿಷ್ಠ ಲೋಭಿಯೂ ಮಂದಿಯ ಧನವನು ಸೆಳೆಯುವನು | ಹಂದಿಯಾಗು ವನು ಕೊಳಚಿಯೊಳಗೆ ಮಲಗುವನು || ೩೬ || ಆದರಿಂದ ಜೀವನೇ ಇವು ಶಾಶ್ವತನಲ್ಲವೂ | ಲೋಭ ಬಿಡಬೇಕು ದಾನಧರ್ಮಕೆ ಕೊಡಬೇಕು ||೩೭|| ಶುದ್ಧ ಆತ್ಮನಾ ಧರ್ಮ ನೀವು ತಿಳಿಯಿರಿ | ಧರ್ಮದ ಮರ್ಮವಾ ಅರಿದು ಮುಕ್ತರಾಗಿರಿ || ೩೮ ||

# ಅಶರಣಾನು ಪ್ರೇಕ್ಷಾ ೨

ಭವ್ಯ ಆತ್ಮರೇ ನೀವು ಕೇಳಿರೆಲ್ಲರೂ | ಜೀವರಾಜನಿಗೆ ಆರಾರು ಶರ ಣಿಲ್ಲಾ ||೩೯|| ಮೂರು ಲೋಕದೊಳು ಸುಜ್ಞಾನದಿ ನೋಡಿದರೆ | ಸುರರು ನರರು ಹರಿಹರಾದಿಕರೆಲ್ಲರೂ || ೪೦ || ಇಂದ್ರ ಚಂದ್ರರೂ ಬಲಿಭದ್ರಾದಿಕ ರೆಲ್ಲರೂ ಮರಣಾಧೀನನೆಂದೂ ಜೈನ ಶಾಸ್ತ್ರ ಪೇಳುವದು || ೪೧ || ಮೂರು ಲೋಕದೊಳು ಸಂಸಾರಿ ಜೀವಕ್ಕೆ | ಮರಣು ಹುಲಿಯಂತೆ ಬೆನ್ನು ಹತ್ತೇ ಇರುವದು ||೪೨|| ಯಾಂತ್ರಿಕ ಮಂತ್ರಿಕರೂ ಮತ್ತೆ ವೈದ್ಯರೆಲ್ಲರೂ | ಮರಣ ಬಂದಾಗ ತಾವು ಸತ್ತೇಹೋಗುವರು ||೪೩|| ಹಿಂದೆ ಅನೇಕಕಾಲ ಸಾಯುತ ಬಂದಾರು | ಮುಂದೆ ಅನೇಕ ಕಾಲ ಸಾಯುತ ಹೋಗುವರು ||೪೪|| ಅತಿ ಕ್ರೋಧಿಯು ಹುಲಿಯಾಗಿ ಜನಿಸುವನು | ಅತಿ ಮಾನಿಯು ಆನೆ ಒಂಟೆ ಯಾಗುವನು ||೪೫|| ಧಾನ್ಯದ ಲೋಭಿಯು ಹಂಚಿನ ಹುಳವನಾಗುವನು | ಅತಿ ಕಪಟಿಗಳು ಕರಡಿಯಾಗಿ ಜನಿಸುವರು ||೪೬|| ಮೋಹದಿಂದಲಿ ಜೀವ ತಾವೇ ಜನಿಸುವವು | ತಾವೇ ಸಾಯುವವು ಹೀಗೆ ತಿರುಗು ತಿರುಗುವವು ||೪೭|| ನಾರಕ ತಿರಿಯಂಚ ಗತಿಯೊಳಗಣ ಜೀವಕ್ಕೆ | ಮರಣ ತಪ್ಪಿಸಲು ಆರಿಂದಲು ಆಗದು ||೪೮|| ಎಂಭತ್ತು ನಾಲ್ಕು ಲಕ್ಷ ಯೋನಿ ಭೇದದೊಳು | ಮೋಹದ ಬಲಿಬಿದ್ದು ಜೀವರಾಸಿ ತಿರುಗುವವು || ೪೯ || ನಿತ್ಯ ನಿಗೋದಾ ಮತ್ತೆ ಇತರ ನಿಗೋದಾ | ಏಳೇಳು ಲಕ್ಷ ಯೋನಿ ಭೇದಗಳಿರುವವು ||೫೦|| ಪೃಥ್ವಿ ಜಲಾಗ್ನಿ ಮತ್ತೆ ವಾಯು ಕಾಯಿಕ | ಏಳೇಳು ಲಕ್ಷ ಯೋನಿ ಭೇದ

ಗಳಿರುವವು ||೫೧|| ಇಂಥ ಯೋನಿಯೊಳು ಲೋಭಿ ಮೋಹಿ ಜೀವ
ಗಳು| ಘೋರ ದುಃಖವಾ ತಾವು ಉಣ್ಣುತಿರುವವು ||೫೨|| ವನಸ್ಪತಿಯೊಳು
ಹತ್ತು ಲಕ್ಷ ಯೋನಿಗಳು | ಆದರೊಳು ಜೀವಗಳು ಹುಟ್ಟುತ ಸಾಯುತ
ಲಿರುವವು ||೫೩|| ಎರಡು ಮೂರ್ನಾಲ್ಕು ಇಂದ್ರಿಯ ಜೀವರಾಶಿಗಳೂ | ಎರ
ಡೆರಡು ಲಕ್ಷ ಯೋನಿಯೊಳಗೆ ಇರುವವು ||೫೪|| ಪಾಪದ ಫಲವನ್ನೂ ಅಲ್ಲಿ
ಭೋಗಿಸುತಿರುವವು | ಬಿಡಿಸುವರು ಅಲ್ಲಿ ಯಾರೂ ಇಲ್ಲ ಕೇಳಿರೀ || ೫೫ ||
ದೇವ ನಾರಕಿ ಮತ್ತು ಪಶು ಪಕ್ಷಿಗಳೋಳ್ | ನಾಲ್ನಾಲ್ಕು ಲಕ್ಷ ಯೋನಿ
ಭೇದಗಳಿರುವವು || ೫೬ || ಪಾಪದ ಫಲವನ್ನು ತಾವೇ ಉಣ್ಣುತಿರುವವು |
ಯಾರಿಗೆ ಯಾರಿಲ್ಲಾ ಎಂದು ತಿಳಿಯರಿ ನೀವೆಲ್ಲಾ || ೫೭ || ಮಾನವ ಗತಿ
ಯೊಳು ಹದಿನಾಲ್ಕು ಲಕ್ಷವು | ಯೋನಿ ಭೇದಗಳು ಆದರೊಳು ಜೀವ ತಿರು
ಗುವವು || ೫೮ || ಮೂರು ಲೋಕದೊಳು ಯಾರಿಗೆ ಯಾರೂ ಶರಣಿಲ್ಲಾ |
ದರ್ಶನ ಜ್ಞಾನವು ಚಾರಿತ್ರ ಶರಣವು || ೫೯ || ಇಂತು ಪೇಳಿದರು ಜಿನರು
ಸಾರಿ ಜಗಕೆಲ್ಲಾ | ಮರೆಯಬೇಡಿರಿ ಧರ್ಮ ಹಿಡಿದು ನಡೆಯಿರಿ || ೬೦ ||
ಧರ್ಮದಿಂದಲಿ ಸರ್ವ ಜೀವಕೆ ಸುಖವುಂಟು | ಕರ್ಮದಿಂದಲಿ ಸರ್ವಜೀವಕೆ
ದುಃಖವು || ೬೧ || ನಂಬಿ ನಡೆದವರೂ ಸಹಜ ಸುಖವ ಕಾಣುವರು |
ನಂಬದಿದ್ದವರೂ ಘೋರ ದುಃಖ ಉಣ್ಣುವರು ||೬೨||

## ಸಂಸಾರಾನು ಪ್ರೇಕ್ಷಾ ೩

ಸಂಸಾರ ವೆಂದರೆ ನಿಮಗೆ ಪೇಳ್ವೆ ನಾಲಿಸರಿ| ಇದ್ದ ದೇಹವಂ ತಾನೂ
ಬಿಟ್ಟು ತೆರಳುವದೂ || ೬೩ || ನೂತನ ದೇಹವ ತಾನೂ ಮುಂದೆ ಧರಿಸು
ವದೂ | ಮತ್ತೆ ಸಾಯುವದೂ ಮತ್ತೆ ತಾನೇ ಜನಿಸುವದು ||೬೪|| ಮೂರು
ಲೋಕದೊಳು ಜೀವರಾಶಿಗಳೆಲ್ಲವೂ | ತಿರ್ರನೆ ತಿರುಗುವವೂ ಸಂಸಾರ ಚಕ್ರ
ದೊಳು || ೬೫ || ದ್ರವ್ಯ ಸಂಸಾರಾ ಮತ್ತೆ ಕ್ಷೇತ್ರ ಸಂಸಾರಾ | ಕಾಲ
ಸಂಸಾರಾ ಭವ ಭಾವ ಸಂಸಾರಾ || ೬೬ || ಪಂಚ ಭೇದಗಳು ಜನ್ಮ ಮರ
ಣಕೆ ಕಾರಣವು | ಎಂದು ಪೇಳಿದರು ತೀರ್ಥೇಶ್ವರರು ಜಗಕೆಲ್ಲ || ೬೭ ||
ನಾನಾ ದೇಹದೊಳು ಜೀವ ಹುಟ್ಟಿ ಬರುವದು | ಮರಣವಾಗಲು ಮತ್ತೆ
ಬಿಟ್ಟು ತೆರಳುವವು || ೬೮ || ಮೂರು ಲೋಕದೊಳು ತಿರುಗುವ ಜೀವರಾಶಿ

ಗಳೂ । ನಾಲ್ಕು ಗತಿಯೊಳು ತಾವು ತಿರುಗುತಿರುವವು ॥ ೬೯ ॥ ಪಾಪ ಪುಣ್ಯದ ಫಲವ ತಾವು ಭೋಗಿಸುತ । ನಾರಕ ತಿರಿಯಂಚ ದೇವ ಮಾನವ ಗತಿಯೊಳು ॥೭೦॥ ಸುಖ ದುಃಖವ ಭೋಗಿಸುತ ತಿರುಗುವವು । ಪೇಳುವೆ ನಾಲಿಸರೀ ಧ್ಯಾನಿಟ್ಟು ಕೇಳಿರೀ ॥ ೭೧ ॥

## ನರಕ ಗತಿಯ ದುಃಖ

ಪಾಪದ ಫಲದಿಂದೆ ಜೀವರಾಶಿಗಳಿಗೆಲ್ಲ । ನಾರಕ ಭೂಮಿಯೊಳು ಆಗುವ ದುಃಖ ಕೇಳಿರಿ ॥೭೨॥ ಕ್ಷೇತ್ರ ದುಃಖವು ಮತ್ತು ಮಾನಸದುಃಖವು। ಪರಕೃತ ದುಃಖವು ಶಾರೀರಿಕ ದುಃಖವು ॥ ೭೩ ॥ ಅಸುರ ಕೃತ ದುಃಖಾ ನಾನಾ ವಿಧವಾಗಿರುವದೂ। ಪಂಚ ಪ್ರಕಾರವೆಂದು ಆಗಮ ಪೇಳುವದು।೭೪। ಕೊಲೆ ಹುಸಿ ಕಳವು ಪರಸ್ತ್ರೀಯರ ಗಮನವು । ಅತಿ ಲೋಭವು ಮಹಾ ಪಾತಕವಿರುವವು ॥ ೭೫ ॥ ಇಂಥಾ ಪಾಪಗಳಾ ಕ್ರೂರತನದಿ ಮಾಡಿದರೆ । ನಾರಕ ಭೂಮಿಗೆ ಆ ಜೀವ ಇಳಿಯುವವು ॥ ೭೬ ॥ ಅಲ್ಲಿಯ ದುಃಖಗಳಾ ನಿಮಗೆ ಪೇಳುವೆ ನಾಲಿಸಿರೀ। ಆದಿ ಜಿನಪರು ಪೇಳಿದ ವಚನ ನಂಬಿರೀ।೭೭। ಜಿನರ ಧರ್ಮವಾ ತಿಳಿಯದ ಮೂಢ ಮತಿಗಳು । ನಾಲ್ಕು ಗತಿಯೊಳು ಸದಾ ಪಾಪ ಬೆಳಿಸುವವು ॥ ೭೮ ॥ ಅತಿ ಕ್ರೋಧಿಯು ಅತೀ ಮಾನೀ ಮಾಯಾವೀ । ಅತಿ ಕಠೋರೀ ಚಾಡೀ ಹೇಳುತ ತಿರುಗುವರೂ ॥ ೭೯ ॥ ದೇವ ಶಾಸ್ತ್ರದ ನಿಂದಾ ಮಾಡಿದ ಜೀವಗಳು । ನಾರಕ ಭೂಮಿಗೆ ಪಾಪ ದಿಂದ ಇಳಿಯುವವು ॥೮೦ ॥ ಕೃತಘ್ನ ಜೀವಗಳು ಬಹಳ ದುಃಖಿ ಶೋಕಿ ಗಳು । ಮರಣಾ ನಂತರ ನಾರಕ ಭೂಮಿಗೆ ಇಳಿಯುವರು ॥ ೮೧ ॥ ಸಮ್ಯಗ್ದೃಷ್ಟಿಗಳು ಇಂಥಾ ಭಾವ ಮಾಡರು। ವಚನ ಕಾಯದಿಂ ಇಂಥಾ ಕಾರ್ಯ ಮಾಡರು ॥ ೮೨ ॥ ಮಿಥ್ಯಾ ದೃಷ್ಟಿಗಳು ಇಂಥ ಕೃತಿಗಳ ಮಾಡುವರು । ಅಂತರಂಗದೊಳು ಕುಭಾವ ಬೆಳಿಸುವರು ॥೮೩॥ ಅದರಿಂದ ನಿಮಗೆ ನಾನು ಸಾರಿ ಪೇಳುವೆನು ! ಧ್ಯಾನಿಟ್ಟು ಕೇಳಿರಿ ಅದರ ಸಾರ ತಿಳಿಯಿರಿ ॥ ೮೪ ॥ ನಾರಕ ಭೂಮಿಯೊಳು ಜೀವ ಜನಿಸಿದೊಡನೆಯೆ । ಶೀತ ಉಷ್ಣವಾ ತಡೆಯದೆ ತಳಮಳಿಸುವದು ॥ ೮೫ ॥ ಪುಟ ಚಂಡಿನಂತೆ ಪುಟ ಪುಟಿದು ಬೀಳುವುದು । ದೇಹವೆಲ್ಲವೂ ಪುಡಿ ಪುಡಿಯಾಗಿ ಹೋಗುವದು ॥ ೮೬ ॥ ಅಲ್ಲಿಯ ದೇಹವು ವಿಕೃತ ವಿಕ್ರಾಳ । ದುರ್ಗಂಧ ದೇಹವು ವಿಚಿತ್ರವಾಗಿ ತೋರುವ

ವದು ॥ ೮೭ ॥ ಅಲ್ಲಿ ವಾಸಿಸುವ ನಾರಕಿ ಜೀವಿಗಳು । ಹಿಡಿಯಿರಿ ಹೊಡಿ ಯಿರಿ ಕೊಲ್ಲಿರೆಂದು ಬರುವವು ॥ ೮೮ ॥ ಕ್ರೂರ ಕರ್ಕಶಾ ಶಬ್ದಗಳನು ಆಡು ವವು । ಎಳೆದು ತರುವವು ಕಿಚ್ಚಿನೊಳಗೆ ಹಾಕುವವು ॥೮೯॥ ಪೂರ್ವ ಭವದ ವೈರ ನೆನಪು ಮಾಡುವವು । ಹಿಂದೆ ಮಾಡಿದ ಫಲವೆಂದು ಹೇಳುವವು॥೯೦॥ ಅವರ ದೇಹದ ತುಂಡು ತುಂಡು ಮಾಡುವವು । ಕೀವದ ಕುಂಡದೊಳು ಹಾಕಿ ಕುದಿಸುವವು ॥ ೯೧ ॥ ಪೂರ್ವ ಭವದೊಳು ಮಾಂಸ ತಿಂದಫಲ ವೆಂದು। ಹೇಳುತ ಕೇಳುತ ಕುಣಿಯುತ ತಾವು ತಿನ್ನುವವು ॥ ೯೨ ॥ ಪಾಪಿ ಜೀವಗಳು ಅಲ್ಲಿ ಅಳುತ ಕರೆಯುತ । ಕಣ್ಣೀರು ಸುರಿಸುತ ಬಹು ದುಃಖಿ ಯಾಗುವವು ॥ ೯೩ ॥ ಮತ್ತೆ ನಾರಕರು ದರ ದರ ಎಳೆದು ತರುವರು । ಕಾಯ್ದ ಎಣ್ಣೆಯೊಳು ಹಾಕಿ ಕುಣಿಯುತ ನಿಲ್ಲುವರು ॥ ೯೪ ॥ ಹೀಗೇಕೆ ಎಂದು ದುಃಖಿ ಜೀವಗಳೆಲ್ಲವೂ । ಕೈ ಮುಗಿದು ಕೇಳಲು ತಾವು ಪೇಳುತಿರು ವವೂ ॥ ೯೫ ॥ ಹಿಂದಿನ ಭವದೊಳು ನೀವು ದಯಾ ಇಲ್ಲದೇ । ಅನೇಕ ಜೀವಿಗಳಾ ಸುಟ್ಟ ಫಲ ಎಂದೆನ್ನುವರು ॥ ೯೬ ॥ ಮತ್ತೆ ನಾರಕರು ಕರಗಸ ವನ್ನು ತಂದು । ನೆತ್ತಿಯ ಮೇಲಿಟ್ಟು ಕರಕರ ಕೊರೆಯುತ್ತಿರುವರು ॥೯೭॥ ಹಿಂದಿನ ಭವದೊಳು ನೀವು ಜ್ಞಾನವಿಲ್ಲದೇ । ಗಂಡರ ಹೆಂಡಿರ ಸೆರಗ ಹರಿ ಸಿದ ಫಲವೆಂದು ॥೯೮॥ ಉಕ್ಕಿನ ಕಂಬವ ತಾವು ಕಾಯಿಸಿ ನಿಲಿಸುವರು । ನಾರಕರನು ತಂದು ಅಪ್ಪಿಕೊಳ್ಳಲು ಹಚ್ಚುವರು ॥ ೯೯ ॥ ಹಿಂದಿನ ಭವ ದೊಳು ವ್ಯಭಿಚಾರದ ಫಲವೆಂದು । ಕೂಗಿ ಹೇಳುವವು ಕುಣಿದಾಡಿ ನಿಲ್ಲು ವವು ॥೧೦೦॥ ಹಾವು ಚೇಳಾಗಿ ಮೈಯಲ್ಲ ಹರಿಯುವವು । ಹದ್ದು ಕಾಗ್ಯಾಗಿ ನಿನ್ನ ಮಾಂಸ ಹರಿಯುವವು ॥೧೦೧॥ ಹಿಂದಿನ ಭವದೊಳು ಚಾಡಿ ಹೇಳಿದ ಫಲವೆಂದು । ನೆನೆಪು ಮಾಡುವವು ಕೂಗಾಡಿ ಕುಣಿಯುವವು ॥ ೧೦೨ ॥ ಹಿಂದಿನ ಭವದೊಳು ಮಾಡಿದ ಋಣ ಹೆತ್ಯಾವೈರ । ಅವಧಿ ಜ್ಞಾನದಿಂ ಅವ ರಿಗೆ ಹೇಳಿ ಹೊಡೆಯುವವು ॥ ೧೦೩ ॥ ಈ ಪರಿ ದುಃಖವು ನರಕದೊಳಗೆ ಕೇಳಿರಿ । ಅನಂತ ಭೇದಗಳು ಆರು ಬಣ್ಣಿಸ ಬಲ್ಲರು ॥೧೦೪॥ ಭವ್ಯ ಜೀವಿ ಗಳ ಬೋಧನಾರ್ಥ ನಾನಿಂದು । ಹೆಗುರದಿ ಪೇಳಿದೆ ನೀವು ಸಹಜ ತಿಳಿ ಯಿರಿ ॥೧೦೫॥ ಇಂಥಾ ಪಾಪಗಳಾ ನೀವು ಬಿಟ್ಟು ನಡೆದರೆ। ಸರ್ವಾತ್ಮಗಳಿಗೆ ಸಹಜ ಸುಖವೆಂದರಿಯಿರೀ ॥೧೦೬॥

## ತಿರಿಯಂಚ ಗತಿಯ ದುಃಖ.

ಕಪಟಿ ಜೀವಗಳೂ ತಿರಿಯಂಚ ಗತಿಯಲ್ಲಿ । ಹೋಗಿ ಜನಿಸುವವು ನಾನಾ ದುಃಖ ಉಣ್ಣುವವು ॥೧೦೭॥ ಮನಸಿನೊಳಗೊಂದು ಮತ್ತೆ ವಚನದೊಳಗೊಂದು । ಕಾಯದೊಳಗೊಂದು ಭೇದ ಹೀಗೆ ವಕ್ರದಿಂದಲಿ ॥೧೦೮॥ ಮಿಥ್ಯಾ ದೃಷ್ಟಿಗಳು ಹೀಗೆ ನಿತ್ಯ ಮಾಡುವವು । ತಿರಿಯಂಚ ಗತಿಗೆ ತಾವು ಹೋಗಿ ಬೀಳುವವು ॥ ೧೦೯ ॥ ಪಶು ಪಕ್ಷಿಗಳು ಮತ್ತೆ ಕ್ರಿಮಿ ಕೀಟಕವು । ಆಗಿ ಜನಿಸುವವು ಘೋರ ದುಃಖ ಉಣ್ಣುವವು ॥ ೧೧೦ ॥ ತಾಡನ ಭೇದನ ಮತ್ತು ಛೇದನ ಮಾರನ । ಆದಿ ದುಃಖಗಳ ತಾವು ಸಹಿಸುತಲಿರುವವು ॥ ೧೧೧ ॥ ತಾವು ಮಾಡಿದ ತಮ್ಮ ಪಾಪದ ಫಲದಿಂದೇ । ಅಸಹ್ಯ ದುಃಖವನೂ ತಾವು ಸಹಿಸುತ್ತಿರುವವು ॥ ೧೧೨ ॥ ಕ್ರೂರ ಮಾನವರು ಪಶುಗಳ ಹಿಡಿದು ತರುವರು। ಕುತ್ತಿಗೆ ಕೊಯ್ಯುವರು ತಾವು ಕುದಿಸಿ ತಿನ್ನುವರು॥೧೧೩॥ ಚರ್ಮ ಸುಲಿಯುವರು ವಾದ್ಯ ಮಾಡಿ ಪೊದೆಯುವರು । ಇದೇ ಧರ್ಮವೆಂದು ಲೋಕಕೆ ಸಾರಿ ಹೇಳುವರು ॥ ೧೧೪ ॥ ಚಂಡಿ, ಚಾಮುಂಡಿ, ದುರ್ಗಿ, ಮಾರಿ ಗುಡಿಯಲ್ಲಿ । ಪಶುಗಳ ಕೊಯ್ಯುವರು ತಮ್ಮ ಧರ್ಮವೆನ್ನುವರು ॥ ೧೧೫ ॥ ಕ್ರೂರ ಪಶುಗಳು ಅಲ್ಲಿ ಕೊಂದು ತಿನ್ನುವವು । ಒಂದರನ್ನೊಂದೊಂದು ನುಂಗಿ ನೀರ ಕುಡಿಯುವವು ॥ ೧೧೬ ॥ ಕಾಲ ಕಾಲಕೆ ಅನ್ನ ನೀರು ಇಲ್ಲದೆ। ಹೊಡೆ ಹೊಡೆಯುವರು ಬಹು ದುಃಖ ಕೊಡುವರು ॥ ೧೧೭ ॥ ರೋಗ ಬಂದರೇ ಅಲ್ಲಿ ಆರೂ ನೋಡರು । ಘೋರ ದುಃಖವಾ ತಾವೇ ಭೋಗಿಸುತಿರುವವು ॥ ೧೧೮ ॥ ಜಲಚರವಾದರೆ ಜಾಲ ಹಾಕಿ ಹಿಡಿಯುವರು । ಕುಂದು ಇಲ್ಲದೆ ತಾವು ಕೊಂದು ತಿನ್ನುವರು ॥೧೧೯॥ ಪಕ್ಷಿಗಣದೊಳು ಹೋಗಿ ಜೀವ ಜನಿಸಿದರೇ । ಬಿಲ್ಲು ಬಾಣಗಳಿಂ ಕೊಂದು ಹಾಕುವರು ॥ ೧೨೦ ॥ ರೆಕ್ಕೆ ಕಿತ್ತುವರು ಮತ್ತೆ ಗೋಣ ಕೊಯ್ಯುವರು । ತತ್ತಿ ಒಡೆಯುವರು ಮತ್ತೆ ತಿಂದು ಬಿಡುವರು ॥೧೨೧॥ ಕಪಟಾಚಾರದ ಫಲವು ಹೀಗೇ ತಿಳಿಯಿರಿ । ಲೋಕದೊಳಗೆಲ್ಲಾ ಪ್ರತ್ಯಕ್ಷ ನೋಡಿರೀ ॥ ೧೨೨ ॥ ಆಗಮ ಪ್ರಮಾಣಾ ಮತ್ತು ಅನುಭವ ಪ್ರಮಾಣಾ । ತಿಳಿದು ನಡಿಯಿರೀ ಮೋಕ್ಷ ಮಾರ್ಗ ಹಿಡಿಯಿರೀ ॥ ೧೨೩॥ ಇಂತು ಪೇಳಿದರು ತೀರ್ಥೇಶ್ವರರು । ಸತ್ಯ ಮಾರ್ಗವಾ ಪಿಡಿದು ನೀವು ನಡೆಯಿರೀ ॥೧೨೪॥

## ಮಾನವ ಗತಿಯ ದುಃಖ

ಮಾನವ ಗತಿಯೊಳು ಜೀವಕೆ ಆಗುವ ದುಃಖವಾ। ಕ್ರಮದಿಂಪೇಳುವೆ ನೀವು ಧ್ಯಾನಿಟ್ಟ ಕೇಳಿರಿ ॥ ೧೨೫ ॥ ಪಾಪೋದಯದಿಂದೆ ಕೇಳರಿ ಜೀವ ರಾಜನೇ । ನಾನಾ ದುಃಖಗಳು ಮಾನವ ಗತಿಯೊಳು ॥೧೨೬॥ ಗರ್ಭದೊಳ ಗಿರಲು ಗರ್ಭಪಾತ ಮಾಡುವರು । ಗರ್ಭ ದಹಿಸುವರು ಛೇದನ ಭೇದನ ಮಾಡುವರು ॥ ೧೨೭ ॥ ಯೋನಿಯೊಳಗಿಂದೇ ಹೊರಗೆ ಬರುವ ಕಾಲಕೆ । ಆಗುವ ದುಃಖವಾ ಪೇಳಲಸದಳವೆಂದರು ॥ ೧೨೮ ॥ ಗರ್ಭದೊಳಗೆ ನವ ಮಾಸವಿರುವಾಗ । ತಾಯಿಯ ಗರ್ಭದೊಳು ದುರ್ಗಂಧದೊಳಿರುವವು।೧೨೯ ಬಾಲ ತನದಲಿ ತಂದೆ ತಾಯಿ ತೀರಿದರೆ । ಯಾಚನೆ ಮಾಡುತ ಜೀವ ತಿರುಗುತಿರುವವು ॥೧೩೦॥ ಮನೆ ಮನೆ ತಿರುಗುವವು ಮತ್ತೆ ಬೈಸಿಕೊಳ್ಳುವವು । ಮುಂದೆ ಹೋಗುವವು ದೀನತನದಿ ಬೇಡುವವು ॥ ೧೩೧ ॥ ಅನ್ನ ವಸ್ತ್ರಗಳು ಇಲ್ಲದೆ ಪಾಪೀ ಜೀವಗಳು । ಮೋಹದಿಂದಲಿ ಮತ್ತೆ ಪಾಪ ಮಾಡುವವು ॥ ೧೩೨ ॥ ಸಮ್ಯಕ್ತ್ವ ಸಹಿತ ಪುಣ್ಯ ಮಾಡುವ ಜೀವಗಳು । ಸಿಗುವದು ದುರ್ಲಭಾ ಎಂದು ಜಿನರು ಪೇಳಿದರು ॥ ೧೩೩ ॥ ಪುಣ್ಯವಂತರಿಗೂ ಪಾಪ ಉದಯವಾದಾಗ। ಘೋರ ದುಃಖಗಳೂ ತಾನೇ ಬಂದೇ ಭೋಗಿಪವು।೧೩೪ ರಾಮ ಪಾಂಡವರೂ ಶೀತಾ ಅಂಜನಾ ಆದಿ । ನರ ನಾರಿಯರಾ ಚರಿತ್ರ ನೀವು ನೋಡಿರಿ ॥೧೩೫॥ ಅನೇಕ ಜೀವಗಳೂ ಹೆಂಡರಿಲ್ಲದ ದುಃಖಿಯೂ । ಹೆಂಡರಿದ್ದರೆ ಮಕ್ಕಳಿಲ್ಲದ ದುಃಖವು ॥ ೧೩೬ ॥ ಮಕ್ಕಳಿದ್ದರೆ ಧನ ಧಾನ್ಯದ ಚಿಂತೆಯು । ಧನ ಧಾನ್ಯವಿದ್ದರೆ ನಾನಾ ರೋಗದ ಚಿಂತೆಯು ॥ ೧೩೭ ॥ ಮಕ್ಕಳಿಲ್ಲೆಂದು ನಾರಿಗೆ ಚಿಂತೆಯು।ಮಕ್ಕಳಾದರೆ ಸತ್ತಾರೆಂಬುವ ಚಿಂತೆಯು ॥೧೩೮॥ ಸತ್ತು ಹೋದರೆ ಹಗಲಿರುಳು ಅಳುವರು । ಯಾರಿಗೆ ಯಾರಿಲ್ಲಾ ಅಂಬುವ ಜ್ಞಾನವಿಲ್ಲದೇ ॥ ೧೩೯ ॥ ಪಾಪ ಪುಣ್ಯಗಳಾ ಮಹಿಮೆ ನಿಮಗೆ ಪೇಳುವೆ ! ಧ್ಯಾನಿಟ್ಟು ಕೇಳಿರೀ ಅದರ ಮರ್ಮ ತಿಳಿಯರೀ ॥ ೧೪೦ ॥ ಸಧನನಿದ್ದರೂ ಒಮ್ಮೆ ನಿರ್ಧನನಾಗುವನು । ರಾಜನಿದ್ದವನೂ ಒಮ್ಮೆ ದಾಸನಾಗುವನು ॥೧೪೧॥ ಸೇವಕನಿದ್ದವನೂ ಒಮ್ಮೆ ರಾಜನಾಗುವನು । ಪಾಪ ಪುಣ್ಯಗಳಾ ಉದಯದ ಫಲವು ತಿಳಿಯರಿ ॥ ೧೪೨ ॥ ಮಿತ್ರ ತಾನೊಮ್ಮೆ ಶತ್ರುನಾಗಿ ನಿಲ್ಲುವನು। ಶತ್ರು ತಾನೊಮ್ಮೆ ಮಿತ್ರನಾಗಿ ತೋರುವನು।೧೪೩।

ಹೆಂಡತಿ ತಾನೊಮ್ಮೆ ಪತಿಯ ಕೊಲ್ಲಲು ಬಯಸುವಳು । ಪತಿಯು ತಾನೊಮ್ಮೆ ಹೆಂಡತಿಯ ಕೊಲ್ಲುವನು ||೧೪೪|| ತಾಯಿ ತಾನೊಮ್ಮೆ ಮಗನೆ ಕೊಲ್ಲಲಿಚ್ಛಿಪಳು । ಪುತ್ರ ತಾನೊಮ್ಮೆ ತಾಯಿಯ ಕೊಂದು ಹಾಕುವಳು || ೧೪೫ || ಬಂಧು ಬಾಂಧವರು ಧನದ ಲೋಭದಿಂದಲಿ । ಕಲಹ ಮಾಡುವರು ದ್ವೇಷ ಬೆಳಿಸಿ ನಿಲ್ಲುವರು || ೧೪೬ || ಕರ್ಮೋದಯದ ಫಲಗಳು ವಿಚಿತ್ರ ಇರುವವು । ಸೂಕ್ಷ್ಮ ದೃಷ್ಟಿಯಿಂ ನೀವು ನೋಡಿ ನಡೆಯಿರಿ ||೧೪೭|| ಪಾಪ ಪುಣ್ಯದ ಕರ್ಮದ ಮರ್ಮ ತಿಳಿಯಿರಿ। ಸುಖ ದುಃಖಗಳೂ ಸಾಲಾಗಿ ಬರುವವು ||೧೪೮|| ಜ್ಞಾನ ಜೀವಗಳೂ ಸುಖ ದುಃಖ ಬಂದಾಗ । ಹರುಷ ವಿಷಾದಾ ತಾವು ಮನ್ನಿಸದಿರುವರು || ೧೪೯ || ಸಮತಾ ಭಾವವೇ ಸತ್ಯ ಧರ್ಮವೆಂಬುವದು । ಜಿನರು ಪೇಳಿದರು ನೀವು ನಂಬಿ ನಡೆಯಿರಿ || ೧೫೦ ||

## ದೇವಗತಿಯ ದುಃಖ

ಪುಣ್ಯೋದಯದಿಂದೇ ಕೆಲವು ಜೀವ ರಾಶಿಗಳು । ಸ್ವರ್ಗ ಸೇರಿದರೂ ಅಲ್ಲಿ ಮಾನಸ ದುಃಖವು ||೧೫೧|| ಬುದ್ಧಿ ಸಂಪನ್ನ ದೇವಗಣವನ್ನು ಕಂಡು। ಕಿಲ್ಮಿಷ ದೇವರು ಮರಮರ ಮರಗುತಿರುವವು || ೧೫೨ || ಮರಣ ಕಾಲಕ್ಕೆ ವಸ್ತ್ರಾಭರಣ ಬಾಡಲು। ಆರು ತಿಂಗಳು ದುಃಖದಿಂದೇ ಬಳಲುವವು||೧೫೩|| ಇಷ್ಟ ವಿಯೋಗಾ ಮತ್ತೆ ಅನಿಷ್ಟ ಸಂಯೋಗಾ । ದೇವಗಣಗಳಿಗೆ ಅಲ್ಲಿ ಕಾಡುತಿರುವದೂ || ೧೫೪ || ಆಯು ತೀರಿದ ಮೇಲೆ ಸ್ವರ್ಗ ಬಿಡುವವು । ದುರ್ಗತಿಯೊಳು ತಾವು ಬಂದು ಬೀಳುವವು || ೧೫೫ || ನಾಲ್ಕು ಗತಿಯೊಳು ಹೀಗೆ ದುಃಖವಿರುತಿರಲು । ಮೋಹಿ ಜೀವಗಳು ಮತ್ತೆ ಅದನೇ ಬಯಸುವವು || ೧೫೬ || ಅಸಾರ ಸಂಸಾರಾ ಇದು ದುಃಖದ ಭಾಂಡಾರಾ । ಜ್ಞಾನೀಜೀವಗಳು ಇದನು ತಿಳಿದು ಬಿಡಬೇಕು || ೧೫೭ || ಇದನ್ನರಿದವರು ದುರ್ಮೋಹ ಬಿಡಬೇಕು । ನಿಮ್ಮ ಮನವನ್ನು ನೀವು ನಿರ್ಮಲ ಇಡಬೇಕು ||೧೫೮|| ವಿಭಾವ ಬಿಡಬೇಕು ಮತ್ತು ಸ್ವಭಾವ ಹಿಡಿಬೇಕು । ತೀರ್ಥೇಶ್ವರರು ಹೀಗೆ ಜಗಕೆ ಹೇಳಿದರು ||೧೫೯||

## ಏಕತ್ವಾನು ಪ್ರೇಕ್ಷಾ ೪

ತಾವು ಮಾಡಿದ ಪಾಪ ಪುಣ್ಯದ ಫಲಗಳಾ। ಜೀವ ರಾಶಿಗಳೂ ತಾವೇ ಭೋಗಿಸುತ್ತಿರುವವು ||೧೬೦|| ಇಲ್ಲಿಯ ದೇಹವ ತಾವು ಬಿಟ್ಟು ತೆರಳುವವು।

ಅಲ್ಲಿ ಮತ್ತೊಂದು ದೇಹ ಹೊತ್ತು ನಿಲ್ಲುವವು ||೧೬೧|| ಪಾಪದ ಫಲದಿಂದೇ| ಅಲ್ಲಿ ದುಃಖಿಯಾಗುವರು| ಮಾನಸ ತಾಪದಿಂ ಅಲ್ಲಿ ಬಳಲುತಿರುವರು|೧೬೨| ಮರಣ ಕಾಲಕ್ಕೆ ನೀನೋರ್ವನೆ ಜೀವನೆ | ಜನನ ಕಾಲಕೆ ನೀನೋರ್ವನೆ ಜೀವನೇ ||೧೬೩|| ಪಾಪ ಮಾಡುವನು ನೀನೋರ್ವನೆ ಜೀವನೆ | ಆ ಪಾಪದ ಫಲವನ್ನು ಭೋಗಿಸಬೇಕು ಓರ್ವನೆ ||೧೬೪|| ನಾನಾ ಗತಿಯೊಳು ನಾನಾ ದೇಹಗಳಾ ಧರಿಸಿ | ಸುಖ ದುಃಖಗಳಾ ಭೋಗಿಸುವಿ ಜೀವನೇ || ೧೬೫ || ಇಂದ್ರ ಪ್ರತಿ ಇಂದ್ರಾ ಚಕ್ರಿ ಅರ್ಧ ಚಕ್ರಿಗಳಾ| ಸ್ಥಾನ ಮಾನಗಳೂ ಪುಣ್ಯದ ಫಲವು ತಿಳಿಯಿರಿ || ೧೬೬ || ಮೂರು ಲೋಕದೊಳು ಜೀವಕೆ ಯಾರಿಗೆ ಯಾರಿಲ್ಲಾ| ತಮ್ಮ ಕರ್ಮವಾ ತಾವೇ ಭೋಗಿಸುತಿರುವವು || ೧೬೭ || ದಶ ಲಕ್ಷಣ ಧರ್ಮಾ ಜೀವಕೆ ಶರಣವು | ಧರ್ಮದಿಂದಲೇ ಮುಕ್ತಿ ಸದನ ಸೇರುವನು || ೧೬೮ || ಜೀವನೋರ್ವನೇ ಆತ್ಮಯೋಗ ಮಾಡಿದರೆ ಮುಕ್ತಿಸುಖವನು ತನ್ನ ತಾನೇ ಭೋಗಿಸುವಾ || ೧೬೯ || ಸರ್ವಾದರದಿಂ ನೀವು ಹೀಗೆ ತಿಳಿಯಿರಿ | ಲೋಕದ ಭೋಗವೂ ಮಾಯದ ಮಾಟ ಇರುವದೂ ||೧೭೦||

## ಅನ್ಯತ್ವಾನು ಪ್ರೇಕ್ಷಾ ೫

ಭವ್ಯರು ಕೇಳಿರೀ ಮೂರು ಲೋಕದ ವೈಭವಾ| ಆತ್ಮ ಸ್ವರೂಪದಿಂದ ಭಿನ್ನ ಇರುವದು !! ೧೭೧ !! ಮೂರು ಲೋಕದ ಘೋರ ದುಃಖವೆಲ್ಲವೂ | ಆತ್ಮನ ವಿಪರೀತ ಎಂದು ತಿಳಿಯಿರಿ ಎಲ್ಲರೂ ||೧೭೨|| ಆದರದಿಂದಲಿ ಸರ್ವ ಬಾಹ್ಯವ ತಿಳಿಯಿರಿ | ಆತ್ಮಧ್ಯಾನದೊಳು ನೀವು ನಿಮಗ್ನರಾಗಿರಿ ||೧೭೩|| ಹೀಗೆ ಪೇಳಿದರು ತೀರ್ಥೇಶ್ವರರು ಜಗಕೆಲ್ಲ | ಕೇಳಿದ ಜೀವಗಳು ತಾವು ಮುಕ್ತರಾದರು || ೧೭೪ || ಕೇಳದ ಜೀವ ಭವ ಭ್ರಮೆಯೊಳಿರುತಿಹವು | ನಾಲ್ಕು ಗತಿಯೊಳು ಗರಗರ ತಿರುಗುತಿರುತಿಹವು ||೧೭೫||

## ಅಶುಚಿತ್ವಾನು ಪ್ರೇಕ್ಷಾ ೬

ಸರ್ವ ದುರ್ಗಂಧ ನಿನ್ನ ದೇಹ ಇರುವದು|ಕ್ರಿಮಿ ಕೀಟಕದ ಮನೆಯು ತಾನೇ ಆಗಿಹುದು ||೧೭೬|| ಎಲುವಿನ ಹಂದರಾ ಮೇಲೆ ನರಗಳ ಪಿಂಜರಾ| ಮಾಂಸದ ಪಿಂಡವು ನಿನ್ನ ದೇಹ ತುಂಬಿಹುದು ||೧೭೭|| ಮಲದ ಕುಂಡವೂ

ಹಸಿ ತೊಗಲಿನ ತಿದಿಯು ತಾನೇ ಆಗಿಹುದು ||೧೭|| ನೈ ತುಂಬೆಲ್ಲಾ ಹುಲ್ಲು ತಾನೇ ಬೆಳೆದಂತೆ | ಕೇಶ ಬೆಳೆದಿಹುದು ವಿಚಿತ್ರ ಸೋಗು ನೋಡಿರಿ ||೧೮|| ಉತ್ತಮೋತ್ತಮಾ ರಸ ವಸ್ತುಗಳೆಲ್ಲವೂ | ನಿನ್ನ ದೇಹವೂ ದುರ್ಗಂಧ ಮಾಡುವದು ||೨೦|| ಇಂಥ ದೇಹಕ್ಕೆ ಮೂಢಮತಿಗಳೆಲ್ಲರು | ವಸ್ತ್ರಾಭರಣಾ ಹಾಕಿ ಸನ್ನದೆನ್ನುವರು ||೨೧|| ಹುಚ್ಚು ಮಾನವರೂ ಅವರು ಮಿಥ್ಯಾದೃಷ್ಟಿಗಳು | ದೇಹದ ಮೋಹದಿಂ ದುರ್ಗತಿಗೆ ಇಳಿಯುವರು ||೨೨|| ದೇಹದ ಮೇಲಿನ ಪ್ರೀತಿ ತಾವು ಬಿಡಬೇಕು | ಪರದೇಹದ ಮೇಲೆ ವಿರಕ್ತ ಭಾವ ಇರಬೇಕು ||೨೩|| ಇದರಿಂದ ನಿಮಗೆ ಮುಕ್ತಿಪದವು ದೊರೆಯುವದು ಜಗದ್ಗುರುಗಳು ಹೀಗೆ ಜಗಕೆ ಹೇಳಿದರು ||೨೪||

## ಆಶ್ರವಾನು ಪ್ರೇಕ್ಷಾ ೭

ಮನ ವಚನ ಕಾಯಾ ಯೋಗ ಶಕ್ತಿಯಿಂ | ಮೋಹೋದಯದಿಂದೇ ಜೀವಕೆ ಕರ್ಮ ಬರುವವೂ || ೨೫ || ಮಿಥ್ಯಾಭಾವದಿಂ ಜೀವಕೆ ನಿಷ್ಠುರ ಕರ್ಮವೂ | ಅನೇಕ ವಿಧವಾಗಿ ತಾವು ಬಂದು ಬೀಳುವವೂ ||೨೬|| ತೀವ್ರ ಮೋಹದಿಂ ಕ್ರೂರ ಕರ್ಮವಾಗುವವೂ | ಮಂದ ಮೋಹದಿಂ ಪುಣ್ಯ ಕರ್ಮವಾಗುವವು ||೨೭|| ಪುಣ್ಯ ಸಂಚಯುದಾ ಮಾರ್ಗ ನಿಮಗೆ ಪೇಳು ವೆನು | ಧ್ಯಾನಿಟ್ಟು ಕೇಳಿರಿ ಮುಂದೆ ಹಾಗೆ ನಡೆಯಿರಿ ||೨೮|| ಹಿತ ಮಿತ ವಚನವು ಮತ್ತೆ ಕ್ಷಮಾ ಧರಿಸುವರು | ದುರ್ಜನರ ದುರ್ವಚನಾ ತಾನು ಸಹನ ಮಾಡುವದು ||೨೯|| ಸರ್ವ ಜೀವಿಗಳೊಳ್ ಗುಣ ಗ್ರಹಣ ಧರಿಸುವದು | ಇಂಥ ಜೀವಿಗಳು ಸಹಜ ಪುಣ್ಯ ಮಾಡುವವು ||೩೦|| ಪಾಪಿ ಜೀವಿಗಳಾ ಲಕ್ಷಣ ನಿಮಗೆ ಪೇಳುವೆನು| ಧ್ಯಾನಿಟ್ಟು ಕೇಳಿರಿ ಜಾಗ್ರತೆ ಯಿಂದ ನಡೆಯಿರಿ ||೩೧|| ತಮ್ಮ ಆತ್ಮನಾ ತಾವೇ ಹೊಗಳಿಕೊಳ್ಳುವರು| ಪೂಜ್ಯ ಪುರುಷರೊಳು ದೋಷ ಹುಡುಕುತಿರುವರು ||೩೨|| ಬಹುಕಾಲ ತಾವು ದ್ವೇಷ ಧಾರಣೆ ಮಾಡುವರು | ಇಂಥ ಜೀವಗಳು ಸಹಜ ಪಾಪ ಮಾಡುವರು ||೩೩|| ಇದನೆಲ್ಲ ತಿಳಿದು ಭವ್ಯ ಜೀವರಾಶಿಗಳು ಉಪಶಮ ಭಾವದಿಂ ತಾವು ಕಾಲ ಕಳೆಯುವರು ||೩೪|| ಇಂಥ ಜೀವಗಳೇ ಮೋಕ್ಷ ಮಾರ್ಗ ತಿಳಿದವರು | ನುಡಿದು ನಡೆಯುವರು ತಾವು ಮೋಕ್ಷ ಕಾಣು ವರು ||೩೫||

## ಸಂವರಾನು ಪ್ರೇಕ್ಷಾ ೮

ಭವ್ಯ ಜೀವಗಳೇ ಸಂವರಾನು ಪ್ರೇಕ್ಷೆಯಾ| ಧ್ಯಾನಿಟ್ಟು ಕೇಳಿರಿ ಶುದ್ಧ ಗತಿಯು ಪಡೆಯಿರಿ ||೧೯೬|| ದೇಶ ವೃತಗಳೂ ಮತ್ತೆ ಮಹಾ ವೃತಗಳೂ | ಕಷಾಯ ಜೈಸುವದೂ ಜೀವಕೆ ಸಂವರೆ ಕೇಳಿರಿ ||೧೯೭|| ಕುಯೋಗ ಭಾವನಾ ತಾವು ತಡೆದು ನಿಲಿಸುವರು | ಕರ್ಮ ಸಂವರೆಯೂ ಎಂದು ಜಿನರು ಪೇಳಿದರು ||೧೯೮|| ಗುಪ್ತಿ ಸಮಿತಿಯಾ ನಿತ್ಯ ಪಾಲಿಸುತಿರುವದು| ದಶಧರ್ಮಾನು ಪ್ರೇಕ್ಷಾ ನಿತ್ಯ ಭಾವಿಸುತಿರುವದು ||೧೯೯|| ಮೂರು ಗುಪ್ತಿಗಳು ಯೋಗ ನಿರೋಧ ಮಾಡುವವು | ಐದು ಸಮಿತಿಗಳು ಪ್ರಮಾದ ನಾಶ ಮಾಡುವವು ||೨೦೦|| ಪರಿಷಹ ಉಪಸರ್ಗಾ ತಾನು ಸಹನ ಮಾಡುವದು| ಹಸಿವು ತೃಷೆಗಳು ತಾನು ತಡೆದು ನಿಲ್ಲುವದು ||೨೦೧|| ಶ್ರಾವಕ ಮುನಿಗಳು ತಾವು ಉಪಶಮ ಭಾವದಿಂದ | ಕರ್ಮ ಸಂವರೆಯ ನೀವು ನಿತ್ಯ ಮಾಡುವದು ||೨೦೨|| ವೀತರಾಗದಲಿ ತಾವು ನಿಂತು ನೋಡಿದರೆ | ರಾಗದ್ವೇಷಗಳು ತಾನೇ ಲೋಪವಾಗುವವು ||೨೦೩|| ಆತ್ಮ ಧ್ಯಾನವು ನಿರ್ವಿಕಾರ ಸ್ಥಾನವು | ಉತ್ತಮ ಚಾರಿತ್ರವೆಂದು ಜಿನರು ಪೇಳಿದರು ||೨೦೪|| ಇದನ್ನರಿಯದೆ ಮಿಥ್ಯಾಭಾವದಿ ನಡೆಯುವರು | ದೀರ್ಘ ಸಂಸಾರ ತಾವು ನೇಮದಿ ಆಗುವರು ||೨೦೫|| ಪ್ರಮಾದ ಬಿಡಬೇಕು ಪುರುಷಾರ್ಥ ಹಿಡಿಬೇಕು | ಸಂವರೆ ಧರ್ಮೆಂದು ಜೈನ ಶಾಸ್ತ್ರ ಸಾರುವದು ||೨೦೬||

## ನಿರ್ಜರಾನು ಪ್ರೇಕ್ಷಾ ೯

ದ್ವಾದಶ ವಿಧ ತಪಸಾ ತಾನು ನಿಧಾನ ರಹಿತನಾಗಿ| ನಿರಹಂಕಾರದಿಂ ವೈರಾಗ್ಯ ಭರದಿಂದೇ ||೨೦೭|| ಇಂಥಾ ಭಾವಿಗಳು ಕರ್ಮ ಶಕ್ತಿ ಕೆಡಿಸುವರು | ಸ್ಥಿತಿ ಅನುಭಾಗ ಶಕ್ತಿ ನಾಶ ಮಾಡುವರು ||೨೦೮|| ಉಪಶಮ ಭಾವದಿಂ ತಪಸು ಮಾಡುತ ಹೋದರೆ | ಧರ್ಮ ಶುಕ್ಲದ ಧ್ಯಾನಕೆ ಸಾಧನವಾಗುಗುವದು ||೨೦೯|| ಸಹ ಧರ್ಮಿಗಳು ತನ್ನ ನಿಂದೆ ಮಾಡಿದರೆ | ಕಷಾಯ ಜಯಿಸುವರು ಮತ್ತು ಶಾಂತನಿರುವದು ||೨೧೦|| ಪರಿಷಹ

ಉಪಸರ್ಗಾ ತೀವ್ರ ಬಂದ ಕಾಲಕ್ಕೆ | ಪೂರ್ವ ಜನ್ಮದ ಋಣವು ತೀರಿತೆನ್ನು
ವದು | ೨೧೧ || ರಾಗದ್ವೇಷಗಳು ಇವು ಮಲೀನ ಭಾವವೆಂದು | ಮುಟ್ಟದೆ
ನಿಲ್ಲುವನು ದಿಟ್ಟಯೋಗಿ ತಾನಹನು || ೨೧೨ || ರಾಗದ್ವೇಷಗಳು ಇಲ್ಲದ
ಸ್ವರೂಪ ಚರಿತ್ರೆ | ನಿರ್ಮಲ ನಿತ್ಯವೂ ಶುಭ ಜನಕವೆನ್ನುವರಂ || ೨೧೩ ||
ತನ್ನ ಆತ್ಮನಂ ತಾನೇ ಹೆಳಿದುಕೊಳ್ಳುವನು| ಗುಣವಂತರೊಳು ಬಹುಪ್ರೀತಿ
ಮಾಡುವನು || ೨೧೪ || ಮನ ಇಂದ್ರಿಯಾ ತಾನು ಜಯಿಸಿ ನಿಲ್ಲುವನು |
ಸ್ವರೂಪಾಚರಣೆ ಪಾರಾಯಣನೆನಿಸುವವು || ೨೧೫ || ಇಂಥವರ ಜನ್ಮ
ಸಫಲವೆಂದು ತಿಳಿಯಿರೀ| ಇಂಥವರ ಪಾಪ ನಾಶವೆಂದು ತಿಳಿಯಿರಿ || ೨೧೬ ||
ಇಂಥ ಜೀವಕ್ಕೆ ಬಹು ಪುಣ್ಯಬಂಧವು | ಇಂಥ ಜೀವಗಳು ಪರಮ ಸೌಖ್ಯ
ಪಡೆವರು || ೨೧೭ || ಶಮಭಾವದಿಂದೆ ತಮ್ಮ ಆತ್ಮ ಸೌಖ್ಯದೊಳು | ಲೀನ
ನಾಗಿ ತಾ ತಾನು ತನ್ನೊಳಗಿರುವರು || ೨೧೮ || ಇಂಥ ಜೀವಗಳು ಕರ್ಮ
ನಿರ್ಜರೆ ಮಾಡುವರು । ಇಂಥ ಜೀವಗಳು ನಿಯಮದಿ ಮೋಕ್ಷ ಪಡೆವರು
|| ೨೧೯ || ಇಂಥ ಜೀವಿಗಳ ಜನ್ಮ ಸಫಲವೆಂದರು । ಅಂಥ ಜೀವಿಗಳ ಜನ್ಮ
ವಿಫಲವೆಂದರು || ೨೨೦ || ಹೀಗೆ ಹೇಳಿದರು ತೀರ್ಥೇಶ್ವರರು ಜಗಕೆಲ್ಲ |
ನಂಬಿ ನಡೆಯಿರೀ ಮುಕ್ತಿಯ ಸಾಧನ ಮಾಡಿರಿ || ೨೨೦ ||

## ಲೋಕಾನು ಪ್ರೇಕ್ಷಾ ೧೦

ಲೋಕವೆಂದರೆ ಷಡ್ದ್ರವ್ಯ ಭರಿತವು| ಗುಣಗಳ ಪರ್ಯಾಯಾ ನಿತ್ಯ
ಆದರೊಳು ನಡೆಯುವವು || ೨೨೨ || ಜೀವ, ಅಜೀವ, ಧರ್ಮಾ, ಧರ್ಮ,
ಆಕಾಶ, | ಕಾಲ ವೆಂದಿವು ಆರು ದ್ರವ್ಯಗಳಿರುವವು ||೨೨೩|| ಜೀವ ಪುದ್ಗಲ
ಇವುಗಳ ವಿಭಾವ ಪರ್ಯಾಯಾ | ಲೋಕಾಕಾಶದೊಳು ತಾವು ತಿರುಗುತಿ
ರುವವು ||೨೨೪|| ಏಕೇಂದ್ರಿಯಾದಿ ಪಂಚ ಇಂದ್ರಿಯ ಪರಿಯಂತ | ಜೀವ
ರಾಶಿಗಳು ಮೂರು ಲೋಕದೊಳಿರುವವು || ೨೨೫ || ಲೋಕದ ಸುತ್ತಲು
ಮೂರು ವಾತ ವಲಯವು | ಘನ ತನು ವಾತವು ಮತ್ತೆ ಘನೋದಧಿಯು
|| ೨೨೬ || ಕೆಳಗಣ ಭಾಗದೊಳು ನಿತ್ಯ ನಿಗೋದ ಇರುವದು | ಅದರಿಂದ
ಮೇಲೆ ಸಪ್ತ ನರಕಗಳಿರುವವು || ೨೨೭ || ಅಲ್ಲಿಂದ ಮೇಲೆ ಭವನವಾಸಿ

ದೇವರು । ಇರುವ ಸ್ಥಾನವು ನಿತ್ಯ ಸತ್ಯ ಇರುವದು ।। ೨೨೮ ।। ಅದರಿಂದ ಮೇಲೆ ಮಧ್ಯಲೋಕ ಇರುವದು । ತಿರಯಂಚ ಮಾನವರು ಅಲ್ಲಿ ವಾಸ ಮಾಡುವರು ।। ೨೨೯ ।। ಭೂಚರ, ಖೇಚರರೂ ಮತ್ತೆ ನಭಚರ, ಜಲಚರರೂ, । ವಾಸ ಮಾಡುವರು ಇದು ಜಗದ ರೂಢಿಯು ।।೨೩೦।। ಅಲ್ಲಿಂದಾ ಮೇಲೆ ಜೋತಿರ್ಲೋಕವಿರುವದು । ಚಂದ್ರ ಸೂರ್ಯರೂ ನಕ್ಷತ್ರವಿರುವವು ।। ೨೩೧ ।। ಅಲ್ಲಿಂದಾ ಮೇಲೆ ಸ್ವರ್ಗ ಲೋಕವಿರುವದು । ಸೌಧರ್ಮ ಆದಿ ದೇವಗಣಗಳಿರುವವು ।।೨೩೨।। ಅಂತಿಮ ವಾತದೊಳು ಶಿದ್ಧಾಲಯವು ಇರುವದು । ಅನಂತ ಸಿದ್ಧರು ಅಲ್ಲಿ ಶಾಶ್ವತ ಇರುವರು ।। ೨೩೩ ।। ಇದರಿಂದಾಚೆಗೆ ಏನೇನು ಇಲ್ಲವು । ಆಕಾಶ ದ್ರವ್ಯವು ತಾನೇ ತಾನಾಗಿರುವದು ।। ೨೩೪ ।। ಅಲೋಕಾಕಾಶ ಎಂದು ಜಿನರು ಪೇಳಿದರು । ಭವ್ಯ ಜೀವಿಗಳು ಇದನು ನಂಬಿ ನಡೆಯಿರಿ ।। ೨೩೫ ।। ನಂಬಿ ನಡೆದವರು ಮುಕ್ತರಾಗಿ ಹೋದರು । ನಂಬದೆ ಇದ್ದವರು ಇಲ್ಲೆ ತಿರುಗುತಿರುವರು ।।೨೩೬।। ಇಂತು ಪೇಳಿದರು ತೀರ್ಥೇಶ್ವರರು ಜಗಕೆಲ್ಲ । ಭಕ್ತಿ ಭಾವದಿಂ ನೀವು ತಿಳಿದು ನಡೆಯಿರಿ ।।೨೩೭।।

## ಬೋಧಿ ದುರ್ಲಭಾನು ಪ್ರೇಕ್ಷಾ ೧೧

ಕೇಳು ಜೀವನೆ ಜೀವ ನಿಗೋದ ಸ್ಥಾನದೊಳು । ಆದಿ ಇಲ್ಲದೆ ಅಲ್ಲಿ ವಾಸ ಮಾಡುವವೂ ।। ೨೩೮ ।। ಅಲ್ಲಿ ಬೋಧವನು ಜೀವಕೆ ಯಾರೂ ಹೇಳಿಲ್ಲಾ। ಹೇಳಿದರೂ ಅಲ್ಲಿ ತಿಳಿಯುವ ಶಕ್ತಿ ಇರಲಿಲ್ಲ ।।೨೩೯।। ಅಲ್ಲಿಂದಾ ಹೊರಟು ಪೃಥ್ವಿ ಕಾಯಿಕ ಆಗುವವು। ಅಲ್ಲಿ ಬೋಧವೂ ಜೀವಕೆ ಸಿಗದೆ ಹೋಯಿತು ।।೨೪೦।। ಅಲ್ಲಿಂದ ಹೊರಟು ಜಲ ಕಾಯಿಕ ಆಗುವವು । ಅಲ್ಲಿ ಬೋಧವು ಜೀವಕೆ ಸಿಗವೆ ಹೋಯಿತು ।।೨೪೧।। ಆಲ್ಲಿಂದ ಹೊರಟು ಅಗ್ನಿ ಕಾಯಿಕ ಆಗುವವು । ಅಲ್ಲಿ ಬೋಧವು ಜೀವಕೆ ಸಿಗದೆ ಹೋಯಿತು ।೨೪೨। ಅಲ್ಲಿಂದಾ ಹೊರಟು ವಾಯು ಕಾಯಿಕ ಆದವು । ಅಲ್ಲಿ ಬೋಧವು ಜೀವಕೆ ಸಿಕ್ಕಲಾರದು ।।೨೪೩।। ನಾಲ್ಕು ಭೇದದೊಳು ಸೂಕ್ಷ್ಮ ಬಾದರ ಕಾಯಿಕ । ಆಗಿ ಜನಿಸುವವು ಬೋಧೆ ಇಲ್ಲದೆ ಸಾಯುವವು ।।೨೪೪।। ಅಲ್ಲಿಂದ ಹೊರಟು ತ್ರಸ ಕಾಯಿಕ ಆಗುವವು। ಅದು ಸಿಗುವದು ಜೀವಕೆ ದುರ್ಲಭ ದುರ್ಲಭವು

॥ ೨೪೫ ॥ ವಿಕಲೇಂದ್ರಿಯೊಳು ಕೋಟಿ ಪೂರ್ವ ಕಾಲವು । ಆ ಕಾಲವ ಕಳೆದರೂ ಜೀವಕೆ ಬೋಧೆ ಇಲ್ಲವು ॥ ೨೪೬ ॥ ಅಲ್ಲಿಂದ ಹೊರಟು ಮನ ರಹಿತ ಆದವು । ಅಲ್ಲಿ ಜೀವಕೆ ಬೋಧೆ ತಿಳಿಯದೆ ಹೋಯಿತು ॥ ೨೪೭ ॥ ಅಲ್ಲಿಂದ ಹೊರಟು ನರಕ ಭೂಮಿಗೆ ಇಳಿಯುವವು । ಪಂಚ ಪ್ರಕಾರಾ ಘೋರ ದುಃಖ ಉಣ್ಣುವವು ॥ ೨೪೮ ॥ ಅಲ್ಲಿ ಬೋಧೆಯು ಜೀವಕೆ ಸಿಗದೆ ಹೋಯಿತು । ದುರ್ಧ್ಯಾನದಿಂದ ತಿರಿಯಂಚ ಆಗುವವು ॥ ೨೪೯ ॥ ನಾಲ್ಕು ಗತಿಯೊಳು ಮಾನವ ಗತಿಯೇ ಶ್ರೇಷ್ಠವು । ಅದು ದೊರೆದರೂ ಮ್ಲೇಂಛ ರಾಗಿ ಜನಿಸುವರು ॥ ೨೫೦ ॥ ಅಲ್ಲಿ ಬೋಧವು ಜೀವಕೆ ಸಿಗದ ಕಾರಣಾ ಘೋರ ಪಾಪವಾ ಜೀವ ಮಾಡುತ ಬಂದವೂ ॥ ೨೫೧ ॥ ಆರ್ಯ ಕ್ಷೇತ್ರವು ಜೀವಕೆ ಸಿಗುವದು ದುರ್ಲಭವು । ಉತ್ತಮ ಕುಲಗೋತ್ರ ಅಲ್ಲಿ ಸಿಗುವದು ದುರ್ಲಭವು ॥ ೨೫೨ ॥ ಅದು ಸಿಕ್ಕರೂ ಧನಹೀನರಾಗುವರು । ಆತ್ಮ ಬೋಧೆಯು ಅವರಿಗೆ ಸಿಗುವದು ದುರ್ಲಭವು ॥ ೨೫೩ ॥ ಧನವು ಸಿಕ್ಕರೂ ಇಂದ್ರಿಯ ಪೂರ್ಣ ಇಲ್ಲದೆ । ಜೀವ ಜನಿಸಿದರೆ ಅದಕೆ ಬೋಧೆ ಇಲ್ಲವು ॥ ೨೫೪ ॥ ಇಂದ್ರಿಯ ಪರಿಪೂರ್ಣತಾ ಸಿಕ್ಕರೂ ಕೇಳು ಜೀವನೆ । ರೋಗ ಪೀಡಿತ ಆದರೆ ಬೋಧೆ ಇಲ್ಲವು ॥ ೨೫೫ ॥ ನಿರೋಗ ಕಾಯವೂ ಜೀವಕೆ ಸಿಕ್ಕರೂ ಕೇಳಿರಿ । ಶೀಲ ಸಿಗುವದು ಬಹಳೇ ದುರ್ಲಭವಿರುವದು ॥ ೨೫೬ ॥ ಶೀಲ ಸಿಕ್ಕರೂ ಸಾಧು ಸಂಗತಿ ದುರ್ಲಭವು । ಅದು ಸಿಕ್ಕರೂ ಸಮ್ಯಕ್ತ್ವ ದುರ್ಲಭವು ॥ ೨೫೭ ॥ ಸಮ್ಯಕ್ತ್ವ ಸಿಕ್ಕರೂ ಚಾರಿತ್ರ ದುರ್ಲಭವು । ಚಾರಿತ್ರ ಸಿಕ್ಕರೂ ಪರಿಪಾಲನ ದುರ್ಲಭವು ॥ ೨೫೮ ॥ ಸಮುದ್ರ ಮಧ್ಯದೊಳು ಬಂದು ರತ್ನ ಬಿದ್ದರೆ । ಸಿಗುವದು ದುರ್ಲಭಾ ಎಂದು ನೀವು ತಿಳಿಯಿರಿ ॥ ೨೫೯ ॥ ಅದರಂತೆ ಜೀವಾ ಮಾನವ ಜನ್ಮ ದುರ್ಲಭವೂ । ತಿರುಗಿ ಹೋದರೆ ಮತ್ತೆ ದೊರೆವುದು ದುರ್ಲಭ ॥ ೨೬೦ ॥ ಹಿಂದೆ ಹೇಳಿದ ವಾಕ್ಯ ಸತ್ಯ ತಿಳಿಯಿರಿ । ಮಿಥ್ಯಾ ಕಷಾಯಾ ನೀವು ಬಿಟ್ಟು ನಡೆಯಿರಿ ॥ ೨೬೧ ॥ ಪುಣ್ಯೋದಯದಿಂದೇ ಜೀವ ಸ್ವರ್ಗ ಕಂಡರೇ । ಶೀಲ ಇಲ್ಲವೂ ಆಚರಣೆ ಇಲ್ಲವೂ ॥ ೨೬೨ ॥ ದೇವ ಗತಿಯೊಳು ಸಮ್ಯಕ್ತ್ವ ಸಿಕ್ಕರೂ । ತಪಾಚರಣೆಯೂ ಅಲ್ಲಿ ಇಲ್ಲೇ ಇಲ್ಲವು ॥ ೨೬೩ ॥ ಮನುಜ ಗತಿಯೊಳು ತಪಶ್ಚರಣೆ ಕೇಳಿರಿ । ಮನುಜ ಗತಿಯೊ [illegible] ಮಹಾ ವ್ರತವು ತಿಳಿಯಿರಿ ॥ ೨೬೪ ॥ ಮನುಜ ಗತಿಯೊಳು ಶುಕ್ಲ ಧ್ಯಾನ

ವಿರುವದು । ಮನುಜ ಗತಿಯಿಂದ ನಿರ್ವಾಣ ಸಿಗುವದು || ೨೬೫ || ಅತಿ ದುರ್ಲಭ ಆದ ವಸ್ತು ಸಿಕ್ಕರೂ । ವಿಷಯ ಕಷಾಯದೊಳಗೆ ಸಿಕ್ಕಬೀಳು ವರು ||೨೬೬|| ದಿವ್ಯ ರತ್ನವು ತನ್ನ ಕೈಗೆ ಸಿಕ್ಕರೂ । ಮೂಢ ಜೀವಿಗಳೂ ಭಸ್ಮ ನಿಮಿತ್ತ್ಯ ಸುಡುವವು ॥ ೨೬೭ || ದುರ್ಲಭ ದುರ್ಲಭವೂ ಜೀವಕೆ ದರ್ಶನ ಜ್ಞಾನವೂ । ಚಾರಿತ್ರಗಳನ್ನು ಆದರದಿಂದ ಪಾಲಿಸಿರಿ || ೨೬೮ || ಆದರದಿಂದಲಿ ನೀವು ಪಾಲಿಸದಿದ್ದರೆ । ದೀರ್ಘ ಸಂಸಾರಾ ನಿಮಗೆಂದು ತಿಳಿಯಿರಿ || ೨೬೯ || ತೀರ್ಥೇಶ್ವರರೂ ಹೀಗೆ ಜಗಕೆ ಪೇಳಿದರು । ನಂಬಿ ನಡೆಯಿರೀ ಧರ್ಮ ಹಿಡಿದು ನಡೆಯಿರಿ ||೨೭೦||

# ಧರ್ಮಾನು ಪ್ರೇಕ್ಷಾ ೧೨

ಆತ್ಮ ರಕ್ಷಣೆಗೆ ಮೂಲ ಧರ್ಮ ಕೇಳಿರೀ । ಸಮ್ಯಕ್ತ್ವವೆಂದು ಆದಿ ಜಿನರು ಪೇಳಿದರು || ೨೭೧ || ಇಪ್ಪತ್ತು ಐದು ಮಲದೋಷ ರಹಿತವು । ಸಮ್ಯಕ್ತ್ವವು ಶ್ರೇಷ್ಠ ಧರ್ಮ ತಿಳಿಯಿರಿ || ೨೭೨ || ರತ್ನತ್ರಯವು ಸಹಿತ ನಿತ್ಯ ಕ್ಷಮಾದಿ ಭಾವದೊಳು । ಪರಿಣಮಿಸುವದು ಸಾಧುವರ್ಯರ ಲಕ್ಷಣವು || ೨೭೩ || ಕ್ಷಮಾ ಧರ್ಮವಾ ನಿಮಗೆ ಪೇಳುವೆ ನಾಲಿಸಿರಿ । ಜಿನರ ವಚನೆಂದು ನೀವು ನಂಬಿ ನಡೆಯಿರೀ || ೨೭೪ || ಸುರ ನರ ತಿರಯಂಚ ಉಪಸರ್ಗ ಮಾಡಿದರೂ । ತಾಪ ಇಲ್ಲದೇ ಬಹು ಶಾಂತ ಇರಬೇಕು |೨೭೫|| ಮಾರ್ದವ ಧರ್ಮವಾ ಚಿತ್ತಿಟ್ಟು ಕೇಳಿರಿ । ತೀರ್ಥೇಶ್ವರರೂ ಹೀಗೆ ಜಗಕೆ ಪೇಳಿದರೂ ||೨೭೬|| ಉತ್ತಮ ಜ್ಞಾನಗಳೂ ಮತ್ತು ಉತ್ತಮ ತಪಗಳೂ । ಸಾಧ್ಯವಾದರೂ ಗರ್ವ ಪಡದೆ ಇರಬೇಕು || ೨೭೭ || ಆರ್ಜವ ಧರ್ಮವಾ ನಿಮಗೆ ಪೇಳುವೆ ನಾಲಿಸಿರಿ । ಸತ್ಯ ಧರ್ಮವು ಮುಕ್ತಿಗೆ ಸಾಧನವು |೨೭೮| ವಕ್ರ ಭಾವನೆಯು ಮತ್ತೆ ವಕ್ರ ಕ್ರಿಯೆಗಳು । ವಕ್ರ ಮಾತುಗಳು ಸಾಧುಗಳಿಗೆ ಸರಿಯಲ್ಲಾ । ೨೭೯ । ತನ್ನ ದೋಷಗಳ ಬಚ್ಚಿ ಇಡದ ಸಾಧುಗಳು । ಸತ್ಯ ಸಾಧು ತಾ ಶ್ರೇಷ್ಠವೆಂದು ತಿಳಿಯಿರಿ || ೨೮೦ || ಶೌಚ ಧರ್ಮವಾ ನಿಮಗೆ ಪೇಳುವೆ ನಾಲಿಸಿರಿ । ಶೌಚ ಅಂದರೆ ಅಂತರಂಗ ಶುದ್ಧಿಯು|೨೮೧|| ಸಮ ಸಂತೋಷವೆಂಬ ಜಲದಿಂದಲಿ । ಲೋಭದ ಮಲವನ್ನು ತಾನು

ತೊಳೆದು ಬಿಡುವನು ‖ ೧೮೨ । ಭೋಜನ ಗೃದ್ಧಿಯನು ತಾನು ನೀಗಿ ಬಿಟ್ಟವನೂ । ಶುದ್ಧ ಭಾವದಾ ಸಾಧು ಎಂದು ತಿಳಿಯಿರಿ ‖ ೧೮೩ ‖ ಸತ್ಯ ಧರ್ಮವಾ ನೀವು ತಿಳಿದು ನಡೆಯಿರಿ । ತಿಳಿಯದಿದ್ದರೆ ನೀವು ಮಾರ್ಗಬಿಟ್ಟರಿ ‖ ೧೮೪ ‖ ಮೂಲೋತ್ತರ ಗುಣವಾ ತಾನು ಪಾಲಿಸದಿದ್ದರೂ । ಆಗಮ ದೊಳಗೆ ಇದ್ದಂತೆ ಪೇಳುವನು ‖ ೧೮೫ ‖ ಸಂಯಮ ಧರ್ಮವಾ ನಿಮಗೆ ಪೇಳುವೆ ನಾಲಿಸರೀ । ಸಂಯಮ ಧರ್ಮದಿಂದಲೇ ಆತ್ಮಶುದ್ಧಿ ಆಗುವದು ‖೧೮೬‖ ಜೀವ ರಕ್ಷಣೆ ಪಾರಾಯಣ ಯೋಗಿಯು । ಗಮನಾಗಮನದೊಳು ಜಾಗ್ರತಿ ಇರುವನು ।೧೮೭। ತ್ರಣ ಭೇದವನ್ನು ತಾನೂ ಇಚ್ಛಿಸಲಾರನು । ಇಂಥ ಸಂಯಮವು ಶ್ರೇಷ್ಠವೆಂದು ತಿಳಿಯಿರಿ ‖೧೮೮। ಪ್ರಾಣಿ ಸಂಯಮ ಮತ್ತೆ ಇಂದ್ರಿಯ ಸಂಯಮಾ। ಕಷಾಯ ಮುಂಪೆ ಆತ್ಮ ಸಂಯಮಾ ।೧೮೯ ನಾಲ್ಕು ಸಂಯಮಾ ಪರಿಪಾಲನೆ ಮಾಡಿದರೆ । ಯೋಗಿವರ್ಯನು ಶ್ರೇಷ್ಠ ಸಂಯಮಿ ಎನಿಸುವನು ‖ ೧೯೦ ‖ ತಪದ ಧರ್ಮವಾ ನೀವು ತಿಳಿದು ನಡೆಯಿರಿ । ತ್ಯಾಗದಿಂದಲಿ ವೈರಾಗ್ಯ ಸ್ಥಿರವಹುದು ।೧೯೧। ರಾಗದ್ವೇಷ ಜನಕ ಉಪಕರಣಗಳನ್ನೂ । ಮಿಷ್ಟ ಭೋಜನವ ತಾನು ತ್ಯಾಗ ಮಾಡುವನು । ೧೯೨ । ಆಕಿಂಚನವು ಬಹಳೇ ದೊಡ್ಡ ಧರ್ಮವು । ಜಾಗ್ರತೆಯಿಂದಲಿ ನೀವು ನಡೆಯಬೇಕರಿ ।೧೯೩। ಲೋಕ ವ್ಯವಹಾರದೊಳು ವಿರಕ್ತನಿರಬೇಕು। ಚೇತನ ಅಚೇತನ ವಸ್ತು ತ್ಯಾಗ ಮಾಡುವನು । ೧೯೪ । ಬ್ರಹ್ಮಚರ್ಯವು ಬಹಳ ಶ್ರೇಷ್ಟ ಧರ್ಮವು । ಬ್ರಹ್ಮಚರ್ಯದಿಂ ಆತ್ಮಸಿದ್ಧಿಯಾಗುವದು।೧೯೫ ಮಹಿಲಾ ಸಂಘವನು ತಾನು ಬಿಟ್ಟು ಬಿಡುವನು । ವಿಕಾರ ಭಾವದಿಂ ಅವರ ರೂಪ ನೋಡನು । ೧೯೬ ‖ ಕಾಮ ಕಥಾದಿ ವಿಕಥೆಯ ಕೇಳನು । ಮನ ವಚ ಕಾಯದಿಂ ತಾನು ತ್ಯಾಗ ಮಾಡುವನು । ೧೯೭ । ತರುಣಿ ಜನರ ಕಾಮ ಕಟಾಕ್ಷ ಬಾಣದಿಂ । ವಿಕಾರವಿಲ್ಲದೆ ಇರುವ ಸಾಧು ಶ್ರೇಷ್ಠನು ।೧೯೮ ಇಂಥ ದಶಧರ್ಮ ಲೋಕದೊಳಗೆ ಶ್ರೇಷ್ಠವು । ಆದರಿಂದ ನೀವು ಪಾಲಿಸುತ ನಡೆಯಿರಿ । ೧೯೯ । ಧರ್ಮಿಷ್ಠ ಜೀವನು ತನ್ನ ವೈರಿ ವರ್ಗಕ್ಕೆ । ಕ್ಷಮಾ ಭಾವನಾ ಸದಾ ತೋರಿಸುತ್ತಿರುವನು । ೨೦೦ ‖ ಇಂಥ ಜೀವಕ್ಕೆ ಎಲ್ಲಿ ಹೋದರೂ ಕೀರ್ತಿಯು । ಸ್ತ್ರೀಪುರುಷರಿಗೂ ಮೂರು ಲೋಕಕೆ ಮಾನ್ಯನು । ೨೦೧ । ಸರ್ವ ಜನರೊಳು ಪ್ರಿಯ ಭಾಷಣ ಮಾಡುವನು । ಸಮಯ

ಸಮಯದೊಳು ಶುದ್ಧಭಾವದಿ ಇರುವನು |೩೦೨| ಇಂತು ಪೇಳಿದರು ಶ್ರೀಥೇಶ್ವರರು ಜಗಕೆಲ್ಲ| ಭಕ್ತಿಭಾವದಿಂ ನೀವು ನಂಬಿ ನಡೆಯಿರಿ |೩೦೩ ಬಲ್ಲಷ್ಟು ಪೇಳಿದೆ ನಾನು ನಿಮಗೆ ಕೇಳಿರಿ । ತಪ್ಪು ಇದ್ದರೆ ನೀವು ತಿದ್ದಿ ಕೊಳ್ಳಿರಿ |೩೦೪। ಸದ್ಗುರು ಶಾಂತಿಸಾಗರರ ನೆನೆಸುತ| ಭಕ್ತಿ ಭಾವದಿಂ ಪಾಯಸಾಗರ ಪೇಳಿದರು |೩೦೫| ಅಕ್ಕೋಳಗ್ರಾಮದ ಪಾರ್ಶ್ವನಾಥ ಮಂದಿರವ| ಭಕ್ತಿ ಭಾವದಿಂ ನೀವು ವಂದನೆ ಮಾಡಿರಿ।೩೦೬| ಶ್ರಾವಣ ಶುದ್ಧ ಪ್ರತಿಪದೆ ದಿನದೊಳು । ಪೂರ್ಣ ಮಾಡಿದರು ಮನದಿ ಶಾಂತಿ ತಾಳಿದರು |೩೦೭| ಕೋಲು ಕೋಲಿನ ಮಿನಗು ಕೋ ||

|| ಇತಿ ದ್ವಾದಶಾನು ಪ್ರೇಕ್ಷಾ ಸಮಾಪ್ತಃ ||